# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 111 |
| ಸದಸ್ಯರ ಹೆಸರು | : | ಶ್ರೀ ಕೆ.ಟಿ. ಶ್ರೀಕಂಠೇಗೌಡ (ಪದವೀಧರರ ಕ್ಷೇತ್ರ) |
| ಉತ್ತರಿಸುವ ದಿನಾಂಕ | : | 08-12-2020 |
| ಉತ್ತರಿಸುವ ಸಚಿವರು | : | ಮಾನ್ಯ ನಗರಾಭಿವೃದ್ಧಿ ಸಚಿವರು |

*****

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಮಂಡ್ಯ ನಗರದ ವಿವೇಕಾನಂದ ನಗರ ಬಡಾವಣೆಯನ್ನು (ಮಂಡ್ಯ ಕೆರೆ ಅಂಗಳ) ಮಂಡ್ಯ ನಗರಾಭಿವೃದ್ಧಿ ಪ್ರಾಧಿಕಾರ ದಿಂದ ಯಾವಾಗ ಅಭಿವೃದ್ಧಿ ಪಡಿಸಲಾಯಿತು; | ಮಂಡ್ಯ ನಗರದ ವಿವೇಕಾನಂದನಗರ ಬಡಾವಣೆಯನ್ನು ಮಂಡ್ಯ ನಗರಾಭಿವೃದ್ಧಿ ಪ್ರಾಧಿಕಾರದಿಂದ 1998ನೇ ಸಾಲಿನಲ್ಲಿ ಅಭಿವೃದ್ಧಿಪಡಿಸಲಾಗಿದೆ. |
| ಆ) | ಈ ಬಡಾವಣೆಯ ಬಗ್ಗೆ ಸಿಬಿಐ ತನಿಖೆ ನಡೆದಿದ್ದು – ಸದರಿ ತನಿಖಾ ವರದಿ ಬಂದಿದೆಯೇ; ಬಂದಿದ್ದಲ್ಲಿ, ವಿವರ ನೀಡುವುದು; ಈ ಬಗ್ಗೆ ಸರ್ಕಾರ ಕೈಗೊಂಡ ಕ್ರಮಗಳೇನು; | ಸರ್ಕಾರದ ಆದೇಶ ಸಂಖ್ಯೆ: ಹೆಚ್ ಡಿ 01 ಸಿಐಡಿ 2014, ದಿನಾಂಕ 09.01.2014 ರಲ್ಲಿ, ಮಂಡ್ಯ ನಗರಾಭಿವೃದ್ಧಿ ಪ್ರಾಧಿಕಾರದ ವತಿಯಿಂದ ನಿವೇಶನ ಹಂಚಿಕೆಯಲ್ಲಿ ನಡೆದಿರುವ ಅವ್ಯವಹಾರಗಳ ಬಗ್ಗೆ ತನಿಖೆ ನಡೆಸಲು ಪ್ರಕರಣವನ್ನು ಸಿ.ಬಿ.ಐ.ಗೆ ವಹಿಸಲಾಗಿತ್ತು. ಅದರಂತೆ, ಸಿ.ಬಿ.ಐ ಸಂಸ್ಥೆಯು ಪ್ರಕರಣದ ತನಿಖೆ ನಡೆಸಿ ಪತ್ರ ಸಂಖ್ಯೆ:ಆರ್.ಸಿ.21(ಎ)/ಸಿಬಿಐ/ಎಸಿಬಿ/ ಬಿಎಲ್ಆರ್/ 8719 ರಲ್ಲಿ ದಿನಾಂಕ 29.12.2015 ರಂದು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಗೆ ತನಿಖಾ ವರದಿಯನ್ನು ಸಲ್ಲಿಸಿತ್ತು. ಸದರಿ ವರದಿಯನ್ವಯ ಆರೋಪಿತ ಅಧಿಕಾರಿ / ನೌಕರರ, ಜನಪ್ರತಿನಿಧಿಗಳನ್ನು ಅಭಿಯೋಗಗೊಳಿಸಲು ಮಂಜೂರಾತಿ ನೀಡುವ ಬಗ್ಗೆ, ಉಳಿದ ನೌಕರರ ವಿರುದ್ಧ ಇಲಾಖಾ ವಿಚಾರಣೆ ನಡೆಸುವ ಬಗ್ಗೆ ಮತ್ತು ನಿಯಮಬಾಹಿರವಾಗಿ ಹಂಚಿಕೆ ಮಾಡಿರುವ 107 ಬಿಡಿ ನಿವೇಶನಗಳನ್ನು ರದ್ದುಗೊಳಿಸುವ ಬಗ್ಗೆ ಕ್ರಮ ಕೈಗೊಳ್ಳುವಂತೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯು ದಿನಾಂಕ 20.04.2016ರ ಅನಧಿಕೃತ ಟಿಪ್ಪಣಿಯಲ್ಲಿ ಕೋರಿರುತ್ತದೆ.<br><br>ಈ ಹಗರಣವನ್ನು ಸಿ.ಬಿ.ಐ.ಗೆ ವಹಿಸುವ ಮುನ್ನವೇ, ನಿಯಮಬಾಹಿರ 107 ಬಿಡಿ ನಿವೇಶನಗಳನ್ನು ಹಂಚಿಕೆ ಮಾಡಲು ಪ್ರಾಧಿಕಾರವು ಕೈಗೊಂಡಿದ್ದ ನಿರ್ಣಯವನ್ನು, ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಕಾಯ್ದೆ, 1987ರ ಕಲಂ.67(3) ರನ್ವಯ ರದ್ದುಪಡಿಸಲಾಗಿದೆ.<br><br>ಸದರಿ ವರದಿಯನ್ವಯ, ಪ್ರಕರಣದಲ್ಲಿ ಭಾಗಿಯಾಗಿದ್ದ ಶ್ರೀಮತಿ ವಿದ್ಯಾನಾಗೇಂದ್ರ, ಅಂದಿನ ಅಧ್ಯಕ್ಷರು, ಮಂಡ್ಯ ನಗರಾಭಿವೃದ್ಧಿ ಪ್ರಾಧಿಕಾರ ಮತ್ತು ಶ್ರೀ ಎಂ.ಜೆ.ಚಿಕ್ಕಣ್ಣ, ಅಂದಿನ ಸದಸ್ಯರು, ಮಂಡ್ಯ ನಗರಾಭಿವೃದ್ಧಿ ಪ್ರಾಧಿಕಾರ ಇವರುಗಳ ವಿರುದ್ಧ ಅಭಿಯೋಜನಾ ಮಂಜೂರಾತಿ ನೀಡಲಾಗಿದೆ.<br><br>ಅದೇ ರೀತಿ ಪ್ರಕರಣದಲ್ಲಿ ಭಾಗಿಯಾಗಿದ್ದ ಶ್ರೀ ಶ್ರೀನಿವಾಸ, ಶ್ರೀ ಎ.ಬಿ.ರಮೇಶ್ ಬಂಡಿಸಿದ್ದೇಗೌಡ ಮತ್ತು ಶ್ರೀ ಸಿ.ಎಸ್.ಪುಟ್ಟರಾಜು, ಮಾನ್ಯ ಶಾಸಕರುಗಳು ಇವರುಗಳ ವಿರುದ್ಧ ಅಭಿಯೋಜನಾ ಮಂಜೂರಾತಿ ಪಡೆದುಕೊಳ್ಳಲು ಸಕ್ಷಮ ಪ್ರಾಧಿಕಾರಕ್ಕೆ ಪ್ರಸ್ತಾವನೆ ಸಲ್ಲಿಸುವಂತೆ ಸಿ.ಬಿ.ಐ ಸಂಸ್ಥೆಗೆ ತಿಳಿಸಲಾಗಿರುತ್ತದೆ.<br><br>ಉಳಿದ 12 ಜನ ಖಾಸಗಿ ವ್ಯಕ್ತಿಗಳನ್ನು ಅಭಿಯೋಜನೆಗೆ ಒಳಪಡಿಸಲು ಸಿ.ಬಿ.ಐ ಸಂಸ್ಥೆಗೆ ತಿಳಿಸಲಾಗಿದೆ. |

| | | |
|---|---|---|
| | | ಉಳಿದಂತೆ, ಆ ಸಮಯದಲ್ಲಿ ಮಂಡ್ಯ ನಗರಾಭಿವೃದ್ಧಿ ಪ್ರಾಧಿಕಾರದಲ್ಲಿ ಕಾರ್ಯನಿರ್ವಹಿಸಿದ್ದ ಇತರೆ ಇಲಾಖೆಯ ಅಧಿಕಾರಿ / ನೌಕರರ ವಿರುದ್ಧ ತನಿಖೆ ನಡೆಸಲು ಸಿ.ಬಿ.ಐ ಸಂಸ್ಥೆಗೆ ಅಭಿಯೋಜನಾ ಮಂಜೂರಾತಿ ನೀಡುವ ಬಗ್ಗೆ ಕ್ರಮ ಕೈಗೊಳ್ಳುವಂತೆ ಸಂಬಂಧಪಟ್ಟ ಇಲಾಖೆಗಳಿಗೂ ಸಹ ನಿರ್ದೇಶನ ನೀಡಲಾಗಿದೆ.<br>ಅದರಂತೆ, ಸಂಬಂಧಪಟ್ಟ ಇಲಾಖೆಗಳೂ ಸಹ ತಮ್ಮ ಇಲಾಖೆಯ ಅಧಿಕಾರಿ / ನೌಕರರ ವಿರುದ್ಧ ತನಿಖೆ ನಡೆಸಲು ಸಿ.ಬಿ.ಐ ಸಂಸ್ಥೆಗೆ ಅಭಿಯೋಜನಾ ಮಂಜೂರಾತಿ ನೀಡಿರುತ್ತವೆ.<br><br>ಆ ಸಮಯದಲ್ಲಿ ಮಂಡ್ಯ ನಗರಾಭಿವೃದ್ಧಿ ಪ್ರಾಧಿಕಾರದಲ್ಲಿ ಕಾರ್ಯನಿರ್ವಹಿಸಿದ್ದ ನಗರಾಭಿವೃದ್ಧಿ ಇಲಾಖೆ ವ್ಯಾಪ್ತಿಗೆ ಒಳಪಡುವ ಅಧಿಕಾರಿ / ನೌಕರರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ನಿವೃತ್ತ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿರುತ್ತದೆ. ವಿಚಾರಣೆಯ ಚಾಲ್ತಿಯಲ್ಲಿರುತ್ತದೆ.<br><br>ಮಂಡ್ಯ ನಗರಾಭಿವೃದ್ಧಿ ಪ್ರಾಧಿಕಾರವು ನಿರ್ಮಿಸಿರುವ ವಿವೇಕಾನಂದ ನಗರ ಬಡಾವಣೆಯಲ್ಲಿ ಸುಮಾರು 2744 ನಿವೇಶನಗಳನ್ನು ನಿಯಮಬಾಹಿರವಾಗಿ ಹಂಚಿಕೆ ಮಾಡಿರುವ ಬಗ್ಗೆ ಸಮಗ್ರವಾಗಿ ತನಿಖೆ ನಡೆಸಲು ಸರ್ಕಾರದ ಆದೇಶ ಸಂಖ್ಯೆ: ಒಇ 278 ಸಿ.ಐ.ಡಿ 2014, ದಿನಾಂಕ 22.01.2016 ರಲ್ಲಿ ಸಿ.ಬಿ.ಐ ಸಂಸ್ಥೆಗೆ ವಹಿಸಲಾಗಿರುತ್ತದೆ. ಈ ಬಗ್ಗೆ ಸಿ.ಬಿ.ಐ ಸಂಸ್ಥೆಯು ತನಿಖೆ ನಡೆಸಿ ದಿನಾಂಕ 13.01.2020 ರಂದು ಸ್ವಯಂ ವೇದ್ಯ ಟಿಪ್ಪಣಿಯನ್ನು ಸಲ್ಲಿಸಿರುತ್ತದೆ ಮತ್ತು ದಿನಾಂಕ 29.09.2020ರ ಪತ್ರದಲ್ಲಿ Closure Report ನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿರುವುದಾಗಿ ಸಿ.ಬಿ.ಐ ಸಂಸ್ಥೆಯು ತಿಳಿಸಿರುತ್ತದೆ. ಸದರಿ Closure Report ನ್ನು ಪಡೆಯಲು ಕ್ರಮವಹಿಸಲಾಗುತ್ತಿದೆ. |
| ಇ) | ಈ ಬಡಾವಣೆಯಲ್ಲಿ ಮೂಲ ಸೌಲಭ್ಯಗಳು ಇಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಈ) | ಮೂಲ ಸೌಲಭ್ಯ ಒದಗಿಸಲು ಸರ್ಕಾರ ಕೈಗೊಂಡ ಕ್ರಮಗಳೇನು? | ಸರ್ಕಾರದ ಆದೇಶ ಸಂಖ್ಯೆ: ನಅಇ 370 ಮೈಅಪ್ರಾ 2016, ದಿನಾಂಕ 23.09.2020 ರಲ್ಲಿ ಸದರಿ ಬಡಾವಣೆಗೆ ಕುಡಿಯುವ ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆ ಕಲ್ಪಿಸುವ ಕಾಮಗಾರಿಗಳ ರೂ.16.46 ಕೋಟಿ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ. |

**ಸಂಖ್ಯೆ: ನಅಇ 315 ಮೈಅಪ್ರಾ 2020 (ಇ)**

**(ಬಿ.ಎ. ಬಸವರಾಜ)**
ನಗರಾಭಿವೃದ್ಧಿ ಸಚಿವರು.